ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ

# ಸಾಮಾನ್ಯಜ್ಞಾನ

ಆಗಸ್ಟ್ 1985

## "39ನೇ ಸ್ವಾತಂತ್ರ್ಯೋತ್ಸವ"

38 ವರ್ಷಗಳ ಸ್ವತಂತ್ರ



ಭಾರತ

ಸಂಪಾದಕ: ಕೊಂಡಜ್ಜಿ ಕೆ. ವೆಂಕಟೇಶ್

ಇಂದು ನೆಡುವ ಮರ.... ನಾಳಿನ ಬಾಳಿನ ಆಧಾರ

# ಇಂದೇ ಒಂದು ಮರ ನೆಡಿರಿ

**ಉಚಿತ ಸಸಿಗಳು ನಿಮಗಾಗಿ ಕಾದಿವೆ.**

ನೀವೊಂದು ಮರ ನೆಟ್ಟರೆ, ಆ ಮರದಿಂದ ನೀವು ಪಡೆಯುವ ಪ್ರಯೋಜನ ಒಂದೆರಡಲ್ಲ. ಪ್ರಯೋಜನ ನಿಮ್ಮೊಬ್ಬರಿಗೆ ಅಲ್ಲ–ನಿಮ್ಮ ಮನೆಯವರಿಗೆ, ಸುತ್ತಮುತ್ತಲ ಜನರಿಗೆ, ಎಲ್ಲರಿಗೂ.

ನಮ್ಮ ಪೂರ್ವಜರಿಗೆ ಮರಗಳ ಮಹತ್ವ ತಿಳಿದಿತ್ತು. ಇದರಿಂದಲೇ ಆ ಕಾಲ ದಲ್ಲಿ ಪ್ರತಿಯೊಂದು ಹಳ್ಳಿಯಲ್ಲಿಯೂ ಮರಗಳ ಒಂದು ತೋಪು ಇರುತ್ತಿತ್ತು. ಪಟ್ಟಣಗಳಲ್ಲಿ ಪ್ರತಿಯೊಂದು ಮನೆಗೂ ಒಂದೆರಡು ಮರಗಳು ತಂಪಿನ ಆಸರೆ ನೀಡುತ್ತಿದ್ದವು.

ಆದರೆ ಇಂದು ನಮ್ಮ ಅರಣ್ಯ ಸಂಪತ್ತು ಕ್ಷೀಣಿಸಿದೆ. ಉರುವಲಿಗಾಗಿ, ಮರ ಮುಟ್ಟುಗಳಿಗಾಗಿ, ಜಾನುವಾರುಗಳ ಮೇವಿಗಾಗಿ, ಕಾಡನ್ನು ಕಡಿದು ನಾಶಪಡಿಸ ಲಾಗಿದೆ. ಅಕ್ರಮವಾಗಿ ಮರ ಕಡಿಯುವುದರಿಂದಷ್ಟೇ ಅಲ್ಲ, ಕಾಳ್ಗಿಚ್ಚಿನಿಂದಲೂ ಮರಗಳು ನಾಶವಾಗುತ್ತಿವೆ–ಇದರ ಪರಿಣಾಮ ನಮ್ಮ ಭವಿಷ್ಯಕ್ಕೆ ಮಾರಕ. ನಮ್ಮ ಅಮೂಲ್ಯವಾದ ಕಾಡುಗಳು ಕಣ್ಮರೆಯಾದರೆ ನಮಗೆ ಕ್ಷಾಮ, ನೆರೆ ಹಾವಳಿ, ಅಷ್ಟೇಕೆ ಪರಿಸರದ ಅವನತಿ–ಎಲ್ಲವೂ ನಿಶ್ಚಿತ.

ಆದರೆ ಒಂದು ಆಶಾಕಿರಣವಿದೆ. ನಾವು ಪ್ರಯತ್ನಿಸಿದರೆ ಈಗಲೂ ನಮ್ಮ ನಾಡನ್ನು ಹಸಿರು ಮರಗಳ ನಂದನವನವನ್ನಾಗಿಸಬಹುದು. ಹೌದು ಈ ಕಾರ್ಯದಲ್ಲಿ ನಿಮ್ಮ ಪ್ರಯತ್ನವೇ ಮುಖ್ಯ. ನೀವು ಒಂದು ಗಿಡ ನೆಡುವ ಮೂಲಕ ನೆರವಾಗಬಹುದು. ಸಾದ್ಯವಾದರೆ, ಇಂದೇ ಒಂದು ಗಿಡ ನೆಡಬಹುದು. ಸಾಧ್ಯವಾದರೆ–ನಿಮ್ಮ ಕೈ ತೋಟ ದಲ್ಲಿ, ಹಿತ್ತಲಿನಲ್ಲಿ, ಹೊಲದಲ್ಲಿ, ನಿಮ್ಮ ಶಾಲೆಯ ಕಾಂಪೌಂಡಿನಲ್ಲಿ-ಎಲ್ಲಿಬೇಕಾದರೂ. ಒಂದೇ ಗಿಡವೇಕೆ ಅವಕಾಶವಿದ್ದರೆ ಸಾವಿರಾರು ನೆಡಬಹುದಲ್ಲವೆ ?

ಇದು ತುಂಬಾ ಸುಲಭ; ಏನೂ ಖರ್ಚಿಲ ! ಕರ್ನಾಟಕ ಸರ್ಕಾರದ ಅರಣ್ಯ ಇಲಾಖೆ ನೀವು ಗಿಡ ನೆಡಲು ಸಹಾಯ ಮಾಡುವ ಯೋಜನೆಯೊಂದನ್ನು ಜಾರಿಗೆ ತಂದಿದೆ. ಇಲಾಖೆ ನಿಮಗೆ ಸಸಿಗಳನ್ನು, ಬೀಜಗಳನ್ನು ಪೂರೈಸುತ್ತದೆ. ಉಚಿತವಾಗಿ ! ತ್ವರೆಮಾಡಿ ! ನಿಮ್ಮ ಕೈಲಾದಷ್ಟು ನೆರವು ನೀಡಿ. ನಿಮಗೆ ಹತ್ತಿರ ವಿರುವ ಅರಣ್ಯ ಇಲಾಖೆಯ ಕಚೇರಿಯನ್ನು ಸಂಪರ್ಕಿಸಿ, ಅಥವಾ ನಮಗೆ ಬರೆಯಿರಿ :

ಅಧಿಕ ಮುಖ್ಯ ಅರಣ್ಯ ಸಂರಕ್ಷಣಾಧಿಕಾರಿ,
ಸಮಾಜಿಕ ಅರಣ್ಯ ಭವನ, ಮಲ್ಲೇಶ್ವರಂ, ಬೆಂಗಳೂರು–560 003.

(ಸಂಖ್ಯೆ : ವಾಪ್ರಇ : ವಾಪ್ರವಿ : ಸಿ.ಆರ್.ಎಂ-12 ಸಿ 3 : 85–86/51
ದಿನಾಂಕ 3-7-1985)

**ಮರಗಳು ನಿಮ್ಮ ಭವಿಷ್ಯ ನಿಧಿ**

ಕರ್ನಾಟಕ ವಾರ್ತೆ

ಸಾಮಾನ್ಯಜ್ಞಾನ

(ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ)

ಸಂಪುಟ ೪ ಸಂಚಿಕೆ ೨ ಆಗಸ್ಟ್ ೧೯೮೫ ಪುಟ ೧೬ ಬೆಲೆ ೭೫

# "ಸ್ವತಂತ್ರರು"

ಮೂವತ್ತೊಂಭತ್ತನೆಯ ಸ್ವತಂತ್ರ ದಿನೋತ್ಸವವನ್ನು ನಾವು ಆಚರಿಸಬೇಕಾಗಿರುವ **ಈ** ಸಂದರ್ಭದಲ್ಲಿ ನಮ್ಮ ದೇಶವನ್ನು ಪರಕೀಯರಿಂದ ಬಿಡಿಸಿ ನಮ್ಮನ್ನೆಲ್ಲಾ ಸ್ವತಂತ್ರಗೊಳಿಸಿ, ನಮ್ಮಿಂದಲೇ ಮೂವತ್ತೆಂಟು ವರ್ಷಗಳಿಂದ ಆಡಳಿತವನ್ನು ನಡೆಸಿಕೊಂಡು ಬಂದಿರುವ ನಾವು ನಮ್ಮ ದೇಶಕ್ಕೆ ನೀಡಿದ ಕೊಡುಗೆ ಏನು ಎಂಬುದನ್ನು ನಾವೆಲ್ಲರೂ ಯೋಚಿಸಬೇಕಾಗಿದೆ. 'ಜಾತ್ಯಾತೀತ ರಾಷ್ಟ್ರ ಭಾರತ' ಎಂದು ನಮಗೆ ನಾವೇ ಘೋಷಿಸಿಕೊಂಡ ನಾವು ಈವರೆಗೆ ಮಾಡಿದ್ದೇನು ? ಸ್ವಜನ ಪಕ್ಷಪಾತವೇ ? ಆತ್ಮ ದ್ರೋಹವೇ ? ದೇಶ ದ್ರೋಹವೇ ? ದೇಶದಿಂದ ನಾವು ನಮ್ಮನ್ನು ಉದ್ಧರಿಸಿಕೊಳ್ಳ ತೊಡಗಿದ ಮೇಲೂ ಆ ದೇಶಕ್ಕೆ ನಾವು ನೀಡಿರುವುದಾದರೂ ಏನು ? ಖಂಡಿತಾ ದೇಶದ್ರೋಹವೆನ್ನಬಹುದೆ ? ಇದಕ್ಕಾಗಿ ಸ್ವತಂತ್ರವೇ ? ಎಂದಿಗೆ ನಮ್ಮ ಮುಂದೆ ಸಂಪೂರ್ಣ ಸ್ವತಂತ್ರ ವಾತಾವರಣ ಮೂಡುತ್ತದೆ ? ಎಂಬೆಲ್ಲಾ ವಿಚಾರಗಳನ್ನು ನಾವು ಯೋಚಿಸಬೇಕಾಗಿರುವ ಈ ದಿನಗಳಲ್ಲಿ ನಮ್ಮ ಹಿರಿಯರು ದೇಶಕ್ಕಾಗಿ ಬಿಟ್ಟು ಹೋದ ಅವರ ಆದರ್ಶಗಳನ್ನು ಗಾಳಿಗೆ ತೂರಿ ದರಿದ್ರ ದೇಶವನ್ನಾಗಿ ಮಾಡುತ್ತಿದ್ದೇವೆಯೇ ?ಹೌದು-ಗಾಂಧೀಜಿ-ನೆಹರು-ಪಟೇಲರು-ಬೋಸ್-ಮುಂತಾದವರಷ್ಟೇ ಅಲ್ಲ ಬುದ್ಧಿ ಜೀವಿಗಳು-ವಕೀಲರು ಕಡೆಗೆ ಆ ದಿನಗಳ ಕೇವಲ ಮನುಷ್ಯ ಹೊಂದಿದ್ದ ದೇಶಾಭಿಮಾನವನ್ನೂ ನಾವು ನಮ್ಮಲ್ಲಿ ಕಾಣದ ಹೊರತು ನಮ್ಮ ಉನ್ನತಿ ಖಂಡಿತಾ ಆಗಲಾರದು.

— ಸಂಪಾದಕ

## ಮಾಸ ಚಿಂತನ

ಸ್ವಾತಂತ್ರ್ಯ—ನನ್ನ ಆಜನ್ಮ ಸಿದ್ಧ ಹಕ್ಕು"

— **ಬಾಲಗಂಗಧರ್ ತಿಲಕ್**

## ನಿಮ್ಮ ಪತ್ರಗಳು

ಮಾನ್ಯರೆ, 'ಸಾಮಾನ್ಯಜ್ಞಾನ'ವನ್ನು ನಾನು ಓದುತ್ತಾ ಇದ್ದೇನೆ- ನನಗೆ ಬಹ ಉಪಯುಕ್ತವಾಗಿದೆ.

ಹುಳಿಯಾಳ (ಉ.ಕ.) — **ಸಚೀನ ಆರ್. ನಾಗವೇಕರ**

---

# ಉದ್ಯೋಗ ಅವಕಾಶಗಳು

ಎಂಜನಿಯರಿಂಗ್ ಸೇವೆ—1985

ಆಗಸ್ಟ 11, 1985

ಸ್ಟೇಟ್ ಬ್ಯಾಂಕ್ ಗುಂಪಿನ-ಬೆಂಗಳೂರು, ಹೈದರಾಬಾದು ಮದರಾಸ್ ವೃತ್ತದ ಗುಮಾಸ್ತೆ ದರ್ಜೆ ಪರೀಕ್ಷೆಗಳು

1ನೇ ಸೆಪ್ಟೆಂಬರ್ 1985

'ಸಬ್ ಇನ್ಸ್‌ಪೆಕ್ಟರ್' ಹುದ್ದೆಗಳ [ಎಸ್.ಎಸ್.ಸಿ.] ಪರೀಕ್ಷೆಗಳು

ಸೆಪ್ಟೆಂಬರ್/1985

ಸಹಾಯಕ ಆಡಳಿತಾಧಿಕಾರಿಗಳ ಪರೀಕ್ಷೆಗಳು

ದಿನಾಂಕ 10ನೇ ಅಕ್ಟೋಬರ್, 1985

ಬಾಂಬೆಯ ಸ್ಟೇಟ್ ಬ್ಯಾಂಕ್ ಗುಂಪಿನ ಪರೀಕ್ಷೆಗಳು

15ನೇ ಸೆಪ್ಟೆಂಬರ್-1995

'ಸಹಾಯಕರು' ದರ್ಜೆಯ ಪರೀಕ್ಷೆಗಳು—1985

4ನೇ ಅಕ್ಟೋಬರ್

'ರಕ್ಷಣಾ ಸೇವಾ' ಪರೀಕ್ಷೆಗಳು

27ನೇ ಅಕ್ಟೋಬರ್ 1985

# ಮಾಸ ಜ್ಞಾನ

(ಜುಲೈ 1985)

---

ಬರುವ ಶತಮಾನದ ವೇಳೆಗೆ ಭಾರತವು ಚೀಣಾವನ್ನು ಮೀರಿಸಿ ವಿಶ್ವದಲ್ಲಿಯೇ ಅತಿ ಹೆಚ್ಚು ಜನಸಂಖ್ಯೆಯ ರಾಷ್ಟ್ರವೆನಿಸಿಕೊಳ್ಳಲಿದೆ. ಇತ್ತೀಚಿನ ವಿಶ್ವ ಬ್ಯಾಂಕ್‌ನ ವರದಿಯ ಪ್ರಕಾರ 1983ರಲ್ಲಿ ಚೀಣದ ಜನಸಂಖ್ಯೆ 101·9 ಕೋಟಿ ಹಾಗೂ ಭಾರತದ ಜನಸಂಖ್ಯೆಯು 73·3 ಕೋಟಿ ಆಗಿದ್ದಿತ್ತು. ಆದರೆ ಚೀಣವು ಜನಸಂಖ್ಯೆ ನಿಯಂತ್ರಣಕಾರ್ಯವನ್ನು ಮಹತ್ವರವಾಗಿ ಕೈಗೊಂಡಿರುವುದರಿಂದ ಬರುವ ಶತಮಾನದ ವೇಳೆಗೆ ಚೀಣದ ಜನಸಂಖ್ಯೆ 151·7 ಕೋಟಿ ಆದರೆ ಭಾರತದ ಜನಸಂಖ್ಯೆ 170 ಕೋಟಿಗಳಾಗಬಹುದೆಂದು ಅಂದಾಜು ಮಾಡಲಾಗಿದೆ.

**2-7-85** ಭಾರತೀಯ ವಾಯು ಪಡೆಯ ಮುಖ್ಯಸ್ಥರಾದ ಏರ್ ಚೀಫ್ ಮಾರ್ಷಲ್ ಲಕ್ಷ್ಮಣ್ ಮಾಧವ್ ಕತ್ರೆರವರ ನಿಧನ. ಕಳೆದ ಸಪ್ಟೆಂಬರ್‌ನಲ್ಲಿ ವಾಯುಪಡೆಯ ಮುಖ್ಯಸ್ಥರಾಗಿ ಅಧಿಕಾರವಹಿಸಿಕೊಂಡಿದ್ದ ಕತ್ರೆಯವರು ಆ ಸ್ಥಾನದಲ್ಲಿ ಅತಿ ಕಡಿಮೆ ಕಾಲದಲ್ಲಿದ್ದವರ ಪೈಕಿ ಎರಡನೆಯವರಾಗಿದ್ದಾರೆ.

**1-7-85** ರಷ್ಯಾದ ಅಧ್ಯಕ್ಷರಾಗಿ ಆಂಡ್ರೆ ಗ್ರೊಮಿಕೊ (75) ರವರ ಆಯ್ಕೆ.

**3-7-85** ಏರ್‌ಮಾರ್ಷಲ್ ಡೆನ್ನಿಸ್ ಆಂಥೋನಿ ಲಾ ಫಾಂಟೇರವರು ಭಾರತೀಯ ನೌಕಾಪಡೆಯ ಮುಖ್ಯಸ್ಥರಾಗಿ ನೇಮಕಗೊಂಡರು.

**6-7-85** ಗುಜರಾತಿನ ಮುಖ್ಯಮಂತ್ರಿ ಮಾಧವಸಿನ್ಹ ಸೋಲಂಕಿ ಅವರ ರಾಜೀನಾಮೆ ಹಾಗೂ ನೂತನ (ಎಂಟನೇ) ಮುಖ್ಯಮಂತ್ರಿಯಾಗಿ ಅಮರಸಿನ್ಹ ಚೌಧರಿ ಅವರಿಂದ ಅಧಿಕಾರ ಸ್ವೀಕಾರ.

10-7-85 ಒಬ್ಬ ಸಾಮಾನ್ಯ ವ್ಯಕ್ತಿಗೆ ಅಂತರಿಕ್ಷಯಾನ ಮಾಡಲು ಅವಕಾಶ ದಕ್ಕುವುದು ಕುತೂಹಲವೇ ಸರಿ. ಅಂಥಹ ಅದೃಷ್ಟ ರಷ್ಯಾದ ಒಬ್ಬ ಉಪಾಧ್ಯಾಯಿನಿಗೆ ಸಿಕ್ಕಿದೆ. 36 ವಯಸ್ಸಿನ ಮಹಿಳೆ ಕ್ರಿಸ್ಟ ಮ್ಯಾಕುರಿಫರು ರಷ್ಯಾದಲ್ಲಿ ಅಂತರಿಕ್ಷಯಾನ ಮಾಡಲಿರುವ ಮೊದಲನೆಯ ಸಾಮಾನ್ಯ (ಖಾಸಗಿ) ವ್ಯಕ್ತಿಯಾಗಿರುತ್ತಾರೆ. 11,000 ಜನರಲ್ಲಿ ಆಯ್ಕೆಯಾದ ಇವರು ಮುಂದಿನ ಜನವರಿಯಲ್ಲಿ ಆರು ದಿವಸಗಳ ಯಾನ ಮಾಡಲಿದ್ದಾರೆ.

16-7-85 ಜಗತ್ತಿನ ಮೊದಲ ಪರಮಾಣು ಬಾಂಬನ್ನು ಸ್ಫೋಟಿಸಿ 40 ವರ್ಷಗಳಾದ ದಿನ. ಮೆಕ್ಸಿಕೋದ ದಕ್ಷಿಣ ಭಾಗದ ಮರುಭೂಮಿಯಲ್ಲಿ 19-7-45 ರಂದು ಪರಮಾಣು ಬಾಂಬನ್ನು ಸ್ಫೋಟಿಸಲಾಯಿತು.

ಆದಾದ ನಂತರ ಹಿರೋಷಿಮಾ ಹಾಗೂ ನಾಗಸಾಕಿಯ ಮೇಲೆ ಪರಮಾಣುಬಾಂಬು ಸ್ಫೋಟಿಸಲಾಯಿತು. (ಕ್ರಮವಾಗಿ ಆಗಸ್ಟ 6 ಹಾಗೂ ಆಗಸ್ಟ 2, 1945ರಂದು) ಕರ್ಮಿಟ್ ಬೀಹಾನ್ ಎಂಬಾತ ನಾಗಸಾಕಿಯ ಮೇಲೆ ಬಾಂಬ್ ಆಸ್ಫೋಟಿಸುವಾಗ ಅಗತ್ಯ ಗುಂಡಿಯನ್ನು ಚಾಲನೆ ಮಾಡಿದ ಮನುಷ್ಯ. ಈಗ ಈತ ತಾನು 40 ವರ್ಷಗಳ ಹಿಂದೆ ಮಾಡಿದ ತಪ್ಪಿಗಾಗಿ ಕ್ಷಮಾಪಣೆ ಕೇಳಲು ಜಪಾನಿಗೆ ತೆರಳುವ ಕಾತುರನಾಗಿದ್ದಾನೆ. ಅಲ್ಲಿನ (ನಾಗಸಾಕಿಯ) ಜನರಲ್ಲಿ ಈತ ಕ್ಷಮಾಪಣೆ ಪಡೆಯಲು ಸಿದ್ಧನಿದ್ದಾಗ್ಯೂ ಅಲ್ಲಿನ ಜನರು ತಿರಸ್ಕರಿಸಿದ್ದಾರೆ. 66 ವರ್ಷದ ಬೇಹಾನ್ ಟೆಕ್ಸಾಸ್‌ನಲ್ಲಿ ಬ್ಯಾಹ್ಯಾಕಾಶ ತಂತ್ರಜ್ಞನಾಗಿದ್ದಾನೆ.

ಭಾರತವು ತನ್ನಲ್ಲಿನ ಚಿಲ್ಲರೆ ಅಭಾವವನ್ನು ಸುಧಾರಿಸಲು ಸುಮಾರು 64 · 95 ಕೋಟಿ ರೂಪಾಯಿ ಮೌಲ್ಯದ [ಒಂದು ರೂಪಾಯಿ ಐವತ್ತು ಪೈಸೆ ಹಾಗೂ ಇಪ್ಪತ್ತೈದು ಪೈಸೆ] ನಾಣ್ಯಗಳನ್ನು ಆಮದು ಮಾಡಿಕೊಂಡಿದೆ. ಮುಖ್ಯವಾಗಿ ಅಮೇರಿಕ ಸಂಯುಕ್ತ ಸಂಸ್ಥಾನ ಹಾಗೂ ದಕ್ಷಿಣ ಕೊರಿಯಾ ಇವುಗಳಿಂದ ತರಿಸಿಕೊಂಡಿರುವ ಭಾರತ ತನ್ನಲ್ಲಿರುವ ಮುದ್ರಣಗಳ ಕೇಂದ್ರವಾದ ಮುಂಬೈ, ಕಲ್ಕತ್ತ ಹಾಗೂ ಹೈದರಾಬಾದುಗಳಲ್ಲಿ ನಾಣ್ಯಗಳ ಉತ್ಪಾದನೆ ಹೆಚ್ಚಿಸಲು ಕ್ರಮಕೈಗೊಂಡಿದೆ.

24-6-85 ಭಾರತದ ಐಕ್ಯತೆಗೆ ಕುಂದು ತರುವಂತಹ ಮುಖ್ಯ ಸಮಸ್ಯೆಯಾಗಿದ್ದ ಪಂಜಾಬ್ ಸಮಸ್ಯೆಗಳು ಪರಿಹಾರವಾದ ದಿನ. ಸುಮಾರು ನಾಲ್ಕು ವರ್ಷಗಳಿಂದ ಅಕಾಲಿ ಹಾಗೂ ಕೇಂದ್ರದ ನಡುವಣ ನಿಂತಿದ್ದ ಬೃಹತ್ ಸಮಸ್ಯೆಗೆ ಕೆಲವು ಒಪ್ಪಂದದ ಪರಿಹಾರ. ಅವುಗಳಲ್ಲಿ ಮುಖ್ಯವಾಗಿ ಚಂಡೀಘಡವನ್ನು ಪಂಜಾಬ್ ರಾಜ್ಯಕ್ಕೆ ವರ್ಗಾಯಿಸಲಾಯಿತು. (26-1-86 ರಂದು ಅಧಿಕೃತವಾಗಿದೆ), ಸೈನ್ಯದಿಂದ ವಜಾ ಆದವರ ಪುನರ್ವಸತಿ ಹಾಗೂ 1-8-82ರ ತರುವಾಯ ಅಲ್ಲಿನ ಗಲಭೆಗಳಲ್ಲಿ ಸಾವಿಗೀಡಾದವರ ಸಂಬಂಧಿಗಳಿಗೆ ಪರಿಹಾರ ನೀಡುವಿಕೆ (ಆಸ್ತಿ ಹಾನಿಗೂ ಸೇರಿದಂತೆ)

ಕಳೆದ ಹತ್ತು ವರ್ಷಗಳಲ್ಲಿ ಭಾರತದ ಸಕ್ಕರೆ ವಚ್ಚ ದ್ವಿಗುಣವಾಗಿದೆ. 1974–75 ಸಾಲಿಗೆ ಭಾರತದಲ್ಲಿ 35.11 ಲಕ್ಷ ಟನ್ ಸಕ್ಕರೆ ಉಪಯೋಗಿಸಲ್ಪಟ್ಟಿದ್ದರೆ 1983–84ರಲ್ಲಿ ಅದರ ಪ್ರಮಾಣ 74.42 ಲಕ್ಷ ಟನ್ ಆಗಿದೆ. ಉತ್ಪಾದನೆ ದೃಷ್ಟಿಯಿಂದ 1981–82ರಲ್ಲಿ (84.36 ಲಕ್ಷ ಟನ್) ಹಾಗೂ 1982=83ರಲ್ಲಿ (82.32 ಲಕ್ಷ ಟನ್) ಭಾರತವು ಗಮನೀಯ ಸಾಧನೆಯತ್ತ ಸಾಗಿದೆ. 1969-70ರಲ್ಲಿ 32.10 ಲಕ್ಷ ಟನ್ ಸಕ್ಕರೆಯನ್ನು ಉಪಯೋಗಿಸಿದ್ದ ಭಾರತ 1984–85ರಲ್ಲಿ 80 ಲಕ್ಷ ಟನ್ ಉಪಯೋಗಿಸಬಹುದೆಂದು ಅಂದಾಜು

29–7–85 ಮಲೆಯಾಳಿ ಲೇಖಕ ಶ್ರೀ ತಕ್ಷಾಳ್ ಶಿವಶಂಕರ ಪಿಳ್ಳೈಯವರಿಗೆ 1984ರ ಭಾರತೀಯ ಜ್ಞಾನಪೀಠ ಪ್ರಶಸ್ತಿ ನೀಡಲಾಗಿದೆ. ಮಲೆಯಾಳಿ ಸಾಹಿತ್ಯಕ್ಕೆ ಸುಮಾರು 500 ಸಣ್ಣ ಕಥೆಗಳು ಹಾಗೂ 35 ಕಾದಂಬರಿಗಳನ್ನು ನೀಡಿರುವ ಇವರಿಗೆ ಯಾವ ಬರಹಕ್ಕೆ ಜ್ಞಾನಪೀಠ ಪ್ರಶಸ್ತಿಯನ್ನು ನೀಡಲಾಗಿದೆ ಎಂಬುದನ್ನು ಪ್ರಶಸ್ತಿ ಸಮಿತಿಯು ತಿಳಿಸಿಲ್ಲ.



# ನೀವೇ ಹೇಳಿ

1. ಗಣಕ ಯಂತ್ರ (ಕಂಪ್ಯೂಟರ್) ವನ್ನು ಯಾವ ವರ್ಷದಲ್ಲಿ ಕಂಡು ಹಿಡಿಯ ಲಾಯಿತು? (ಮೂಲ ಮಾದರಿ) :

ಅ. 1800 ಬ. 1947 ಕ. 1823 ಗ. 1917

2. ವಿದ್ಯುಚ್ಚಾಲಿತ ಕಂಪ್ಯೂಟರನ್ನು ರೂಪಿಸಿದ ವರ್ಷ :

ಅ. 1946 ಬ. 1843 ಕ. 1948 ಗ. 1953

3. ಜೆಟ್ ವಿಮಾನವನ್ನು ರೂಪಿಸಿದವರು :
ಅ. ರೈಟ್ ಸಹೋದರು ಬ. ವಿಲಿಯಂ ಹಾರ್ವೆ ಕ. ನೈಟರ್ ಗ. ವಿಲ್ಸನ್

4. ಚಲನಚಿತ್ರವನ್ನು ಕಂಡುಹಿಡಿದವರು :
ಅ. ಜೆ ವಿಂಚೆರ್ಗ ಬ. ಕೊಲೂಂಬಿಯಾ ಕ. ವಾರ್ನರ್ ಸಹೋದರರು
ಗ. ಯಾರೂ ಅಲ್ಲ

5. ದೂರವಾಣಿಯನ್ನು ಯಾವ ವರ್ಷದಲ್ಲಿ ಕಂಡು ಹಿಡಿಯಲಾಯಿತು :
ಅ. 1718 ಬ. 1817 ಕ. 1898 ಗ: 1876

6. ರವೀಂದ್ರನಾಥ ಠಾಗೂರರು ವಿಶ್ವ ಭಾರತಿಯನ್ನು ಸ್ಥಾಪಿಸಿದ್ದು :
ಅ. 1947ರಲ್ಲಿ ಬ. 1918ರಲ್ಲಿ ಕ. 1901ರಲ್ಲಿ ಗ. 1920ರಲ್ಲಿ

7. ಭಾರತದಲ್ಲಿ ರೂಪಾಯಿಯಾದರೆ ಜರ್ಮನಿಯಲ್ಲಿ :
ಅ. ಮಾರ್ಕ್ ಬ. ಜರ್ಮನ್ಸ್ ಕ. ಷಿಲ್ಲಿಂಗ್ಸ್ ಗ. ಫ್ರಾಂಕ್
ಚ. ಯಾವುದೂ ಅಲ್ಲ.

8. ಪ್ರಪಂಚದಲ್ಲಿಯೇ ಅತಿ ಹೆಚ್ಚು ಜನರು ಮಾತನಾಡುವ ಭಾಷೆ :
ಅ. ಇಂಗ್ಲೀಷ್ ಬ. ಹಿಂದಿ ಕ. ಚೈನಿ ಗ. ಯಾವುದೂ ಅಲ್ಲ

9. ಭಾರತದಲ್ಲಿ ಮೊದಲ ಚಲನಚಿತ್ರ ಪದರ್ಶಿತವಾದದ್ದು :
ಅ. 20–7–80ರಲ್ಲಿ ಬ. 15–7–46ರಲ್ಲಿ ಕ. 7-7-1985ರಲ್ಲಿ
7-7-1986ರಲ್ಲಿ

10. ಭಾರತೀಯ ರಿಜರ್ವ್ ಬ್ಯಾಂಕ್ ಅಸ್ಥಿತ್ವಕ್ಕೆ ಬಂದಿದ್ದು.
ಅ. 1-4-35ರಲ್ಲಿ ಬ. 1-12-40ರಲ್ಲಿ ಕ. 1-11-1948ರಲ್ಲಿ
ಗ. ಯಾವುದೂ ಅಲ್ಲ

1. ಕ 2. ಅ. 3. ಕ 5. ಗ 6. ಕ 7. ಅ 8. ಕ 9. ಗ. 10. ಅ

# ಸಾಮಾನ್ಯಜ್ಞಾನ

(ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ)

**ಚಂದಾದಾರರಿಗೆ ಸೂಚನೆ**

1985–86ನೇ ಸಾಲಿನ ಚಂದಾಹಣವನ್ನು ದಯಮಾಡಿ ಕಳಿಸಿಕೊಟ್ಟು ನಿಮ್ಮ ಚಂದಾ ಅವಧಿಯನ್ನು ನವೀಕರಿಸಿಕೊಳ್ಳಿ. ಪ್ರತಿ ತಲುಪದಿದ್ದಲ್ಲಿ ದಯವಿಟ್ಟು ಕೂಡಲೇ ತಿಳಿಸಿ.

ವಾರ್ಷಿಕ ಚಂದಾ ಹಣವನ್ನು ಎಂ. ಓ. ಮೂಲಕ ಕಳಿಸಬೇಕು. ಎಂ. ಓ. ಕೂಪನ್‌ನಲ್ಲಿ ತಮ್ಮ ವಿಳಾಸವನ್ನು ತಪ್ಪದೆ ಬರೆಯಬೇಕು.

ವ್ಯವಹರಿಸಿ :—

ಸಂಪಾದಕರು,
ಸಾಮಾನ್ಯಜ್ಞಾನ
ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ
216, ಸುಬ್ರಮಣ್ಯನಗರ
ಬೆಂಗಳೂರು–560 021

# ಸಾಮಾನ್ಯಜ್ಞಾನ

(ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ)

ಜುಲೈ 1982 ರಿಂದ ಜೂನ್ 1985 ರವರೆಗಿನ ಎಲ್ಲಾ
ಸಂಚಿಕೆಗಳ ಸಂಗ್ರಹ ಮಾರಾಟಕ್ಕೆ
ಸಿದ್ಧವಾಗಿದೆ..

ಪುಟ 500 ಬೆಲೆ ರೂ. 30/-

**ಇಂದೇ ಬರೆಯಿರಿ**

ಸಂಪಾದಕ,
ಸಾಮಾನ್ಯಜ್ಞಾನ
ಕನ್ನಡ ಶೈಕ್ಷಣಿಕ ಮಾಸ ಪತ್ರಿಕೆ
216, ಸುಬ್ರಹ್ಮಣ್ಯನಗರ
ಬೆಂಗಳೂರು-560 021.

# ನಿಮಗೆ ತಿಳಿದಿರಲಿ

.... ಭಾರತೀಯ ವಿಜ್ಞಾನಿ ಡಾ|| ವೈ. ನಾಯುಡಮ್ಮ ಅವರು 1985ರ ಜೂನ್ 23ರಂದು (ಅಟ್ಲಾಂಟಿಕ್ ಸಾಗರ) ಸಂಭವಿಸಿದ ಭಾರತೀಯ ವಿಮಾನ ಅಪಘಾತದಲ್ಲಿ ನಿಧನರಾದರು.

.... 64 ವರ್ಷದ ಪಿ. ಎನ್. ಭಗವತಿ ಅವರು ಭಾರತದ ಸರ್ವೋಚ್ಚ ನ್ಯಾಯಾಲಯದ 17ನೇ ಮುಖ್ಯ ನ್ಯಾಯಾಧೀಶರಾಗಿ ನೇಮಕಗೊಂಡಿದ್ದಾರೆ.

.... 75 ವರ್ಷ ವಯಸ್ಸಿನ ಆ್ಯಂಡ್ರೆ ಎ. ಗ್ರೊಮ್ಯೈಕೋ ಅವರು ರಷ್ಯಾ ದೇಶದ ಅಧ್ಯಕ್ಷರಾಗಿ 2ನೆ ಜುಲೈ 1985ರಂದು ನೇಮಕಗೊಂಡರು.

.... ವಿಶ್ವಸಂಸ್ಥೆಯ ಕಟ್ಟಳೆಗೆ ಸಹಿ ಹಾಕಿದ 40ನೆಯ ವಾರ್ಷಿಕೋತ್ಸವವನ್ನು ಜೂನ್ 26, 1985ರಂದು ಆಚರಿಸಲಾಯಿತು.

.... "ವಿಶ್ವ ನಾಗರೀಕ" ಎಂಬ ಪ್ರಶಸ್ತಿಯನ್ನು ನೋಬೆಲ್ ಪ್ರಶಸ್ತಿ ವಿಜೇತೆ ಮದರ್ ಥೆರೇಸ ಇವರಿಗೆ ಅಮೇರಿ ಅಧ್ಯಕ್ಷ ರೊನಾಲ್ಡ್ ರೇಗನ್ ಅವರು ನೀಡಿದ್ದಾರೆ. ಇದು ಆದೇಶದ ಅತ್ಯುನ್ನತ ಪ್ರಶಸ್ತಿಯಾಗಿದೆ.

.... 'ನೆಹರು ವೈಜ್ಞಾನಿಕ ಪ್ರಶಸ್ತಿ' 1983ನ್ನು ಎಂ. ಜಿ. ಕೆ. ಮೆನನ್ ಇವರಿಗೆ ನೀಡಲಾಗಿದೆ.

.... 1982ರ 'ವಿ. ಕೆ. ಆರ್. ವಿ. ರಾವ್' ಪ್ರಶಸ್ತಿಯನ್ನು ಕುಲದೀಪ್ ನಾಯರ್ ಇವರಿಗೆ ನೀಡಲಾಗಿದೆ.

.... ವಿಂಬಲ್ಡನ್ ಟೆನ್ನಿಸ್ ಆಟದಲ್ಲಿ 17 ವರ್ಷ ವಯಸ್ಸಿನ ಜರ್ಮನಿ ದೇಶದ ಬೋರಿಸ್ ಬೇಕರ್ ಇವರು ಗೆದ್ದಿದ್ದಾರೆ. (ಇವರು ಅಮೇರಿಕದ ಕರೆನ್ ಅವರನ್ನು ಸೋಲಿಸಿದ್ದಾರೆ.)

.... ಡಾ|| ರಾಜಾ ರಾಮಣ್ಣ ಇವರು ಭಾರತದ ಭಾಭಾ ಅಣು ಸಂಸ್ಥೆಯ ಇಂದಿನ ಅಧ್ಯಕ್ಷರಾಗಿದ್ದಾರೆ.

... 'ಇಟೋಶ' ಇದು ಪ್ರಪಂಚದ ಅತಿದೊಡ್ಡ ಪ್ರಾಣಿ ಸಂಗ್ರಹಾಲಯುವಾಗಿದೆ.

.... ಭೂಮಿಯು ತನ್ನ ಸುತ್ತ ಒಂದು ಸುತ್ತು ಹಾಕಲು 24 ಗಂಟೆ, 56 ನಿಮಿಷ ಹಾಗೂ 4 . 09 ಸೆಕೆಂಡುಗಳು ಬೇಕಾಗುತ್ತವೆ.

.... ಡ್ಯಾನಿಯಲ್ ಅರಾಪ್ ಮೊಯ್ ಅವರು 'ಕೆನ್ಯಾ' ದೇಶದ ಇಂದಿನ ಅಧ್ಯಕ್ಷರು.

.... 24ನೇ ಜೂನ್ 1985ರಂದು ಫ್ರಾನ್ಸೆಸೋ ಕೊಸ್ಸಿನಾ ಅವರು ಇಟಲಿ ದೇಶದ ಹೊಸ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ.

.... ಪೋರ್ಚುಗಲ್ ದೇಶದ ವಾಸ್ಕೋ-ಡಿ-ಗಾಮನು 1498ರಲ್ಲಿ ಕಲ್ಲಿಕೋಟೆಯನ್ನು ತಲುಪುವುದರ ಮೂಲಕ ಭಾರತಕ್ಕೆ ಸಮುದ್ರ ದಾರಿಯನ್ನು ಕಂಡು ಹಿಡಿದನು.

.... 15ನೇ ಆಗಸ್ಟ್ 1947ರಂದು ಭಾರತಕ್ಕೆ ಸ್ವತಂತ್ರ ಲಭಿಸಿತು.

.... 30ನೇ ಜನವರಿ 1948ರಂದು ಮಹಾತ್ಮಾ ಗಾಂಧೀ ಕೊಲೆಯಾದರು.

.... 1565 ಈ ಇಸವಿಯಲ್ಲಿ 'ತಾಳಿಕೋಟೆ' ಕದನ ನಡೆಯಿತು. ಈ ಕದನದಲ್ಲಿ ವಿಜಯನಗರ ಸಾಮ್ರಾಜ್ಯ ನಾಶವಾಯಿತು.

.... 1857ರಲ್ಲಿ ಭಾರತ ಸ್ವಾತಂತ್ರ್ಯದ ಪ್ರಥಮ ಸಂಗ್ರಾಮ ನಡೆಯಿತು.

.... ಪ್ರಪಂಚದ ಪ್ರಥಮ ಮಹಿಳಾ ಪ್ರಧಾನಿ ಸಿರಿಮಾವೂ ಭಂಡಾರನಾಯಕ್

.... ನೀಲ್ ಆರ್ಮ್‌ಸ್ಟ್ರಾಂಗ್ (Nile Armstorng) ಚಂದ್ರಲೋಕವನ್ನು ಪ್ರವೇಶಿಸಿದ ಪ್ರಥಮ ಮಾನವ (1869ರಲ್ಲಿ).

.... ರವೀಂದ್ರನಾಥ್ ಠಾಗೂರ್ ನೋಬೆಲ್ ಪ್ರಶಸ್ತಿಗಳಿಸಿದ ಭಾರತದ ಪ್ರಥಮ ವ್ಯಕ್ತಿ

.... ಭಾರತದ ಪ್ರಥಮ ಅಣುಶಕ್ತಿ ಸ್ಥಾವರ ತಾರಾಪುರದಲ್ಲಿ ಸ್ಥಾಪಿಸಲ್ಪಟ್ಟಿದೆ.

.... ಹಿರಾಕುಡ್ ಅಣೆಕಟ್ಟು ಪ್ರಪಂಚದ ಅತಿ ಹೆಚ್ಚು ಉದ್ದದ ಅಣೆಕಟ್ಟು ಎನಿಸಿದೆ.

.... ಭಾರತದ ರಾಕೆಟ್ಟು ಉಡಾವಣೆ ಕೇಂದ್ರ ತುಂಬಾ ಎಂಬಲ್ಲಿ ಸ್ಥಾಪಿಸಲ್ಪಟ್ಟಿತು (Thomba).

.... ರಷ್ಯ (USSR) ಪ್ರಪಂಚದ ಅತಿದೊಡ್ಡ ದೇಶವಾಗಿದೆ.

.... ಪ್ರಾಚೀನದಲ್ಲಿ ಕಿ. ಪೂ. 776ರಲ್ಲಿ ಪ್ರಥಮವಾಗಿ ಒಲಂಪಿಕ್ ಕ್ರೀಡೆಗಳನ್ನು ಏರ್ಪಡಿಸಲಾಯಿತು.

.... 1853ರಲ್ಲಿ ಭಾರತದಲ್ಲಿ ಪ್ರಥಮ ರೈಲ್ವೆ ಸಂಚಾರ ಆರಂಭವಾಯಿತು.

.... ಭಾರತವು ಪ್ರಪಂಚದಲ್ಲಿಯೇ ಅತಿ ಹೆಚ್ಚು ಚಲನ ಚಿತ್ರಗಳನ್ನು ನಿರ್ಮಿಸುವ ದೇಶವಾಗಿದೆ.

.... ಭೂಮಿಯ ಪರಿಧಿಯನ್ನು [Circumstrance] ಪ್ರಥಮವಾಗಿ ಅಳೆದವರು ಎರಾಟೋಸ್ತೆನಸ್ [Eratohtsenes].

.... ಭಾರತದ ಅತಿ ದೊಡ್ಡ ತೈಲಶುದ್ಧಿಕರಣ ಸ್ಥಾವರ ಕೊಯಲಿ [Koyali] ಯಲ್ಲಿದೆ.

# ನೋಬಲ್ ಪ್ರಶಸ್ತಿಗಳು (ರಸಾಯನಶಾಸ್ತ್ರ)

(ಮುಂದುವರೆದಿದೆ)

| | | |
|---|---|---|
| 1940 ರಿಂದ 1942 | | ಪ್ರಶಸ್ತಿ ನೀಡಲಾಗಿಲ್ಲ |
| 1943 | ಹಂಗೇರಿ | ಜಿ. ಹೆಚ್. ಡಿ. ಹೆವೀಸ್ |
| 1944 | ಜರ್ಮನಿ | ಒಟ್ಟೋ ಹಾನ್ |
| 1945 | ಫಿನ್ಲೆಂಡ್ | ಆರ್ಟ್ಟುರಿ ಎಲ್. ವಿರ್ಟನೆನ್ |
| 1946 | ಅಮೇರಿಕಾ | ಜೆ. ಬಿ. ಸಮ್ನರ್, ಡಬ್ಲ್ಯು. ಎಂ. ಸ್ಟಾನ್ಲೆ ಮತ್ತು ಜೆ. ಹೆಚ್. ನಾರ್ತ್ರೋಪ್ |
| 1947 | ಇಂಗ್ಲೆಂಡ್ | ಸರ್ ರಾಬರ್ಟ್ ರಾಬಿನ್ಸನ್ |
| 1948 | ಸ್ವೀಡನ್ | ಆರ್ನೆ ಡಬ್ಲ್ಯು. ಕೆ. ಟಿಸೆಲಿಯಸ್ |
| 1949 | ಅಮೇರಿಕಾ | ವಿಲಿಯಂ ಎಫ್. ಗ್ಯಾಕ್ಯು |
| 1950 | ಜರ್ಮನಿ | ಓಟೋ ಡೈಯಲ್ಸ್ ಮತ್ತು ಕರ್ಟ್ ಆಲ್ಡರ್ |
| 1951 | ಅಮೇರಿಕ | ಎಡ್ವರ್ಡ್ ಎಂ. ಮಾಕ್ಮಿಲನ್ ಮತ್ತು ಗ್ಲೆನ್ ಟಿ. ಸೀಬೋರ್ಗ್ |
| 1952 | ಇಂಗ್ಲೆಂಡ್ | ಆರ್ಚರ್ ಜೆ. ಪಿ. ಮಾರ್ಟಿನ್ ಮತ್ತು ರಿಚರ್ಡ್ ಎಲ್. ಎಂ. ಸಿಂಜ್ |
| 1953 | ಜರ್ಮನಿ | ಹರ್ಮನ್ ಸ್ಟಾಡಿಂಜರ್ |
| 1954 | ಅಮೇರಿಕಾ | ಲೈನಸ್ ಸಿ. ಪೌಲಿಂಗ್ |
| 1955 | ಅಮೇರಿಕಾ | ವಿನ್ಸೆಂಟ್ ಡು ವಿಗ್ನಾಯ್ಡ್ |
| 1956 | ಇಂಗ್ಲೆಂಡ್ | ಸರ್ ಸೈರಿಲ್ ಹಿನ್ಷೆಲ್ವುಡ್ |
| | ರಶ್ಯ | ನಿಕೋಲೈ ಎನ್ ಸೆಮಿನೋ |
| 1957 | ಇಂಗ್ಲೆಂಡ್ | ಸರ್ ಅಲೆಗ್ಸಾಂಡರ್ ಟಾಡ್ |
| 1958 | ಇಂಗ್ಲೆಂಡ್ | ಫ್ರೆಡರಿಕ್ ಸಾಂಜರ್ |
| 1959 | ಜೆಕೆಸ್ಲೋವಾಕಿಯಾ | ಜಿರೋಸ್ಲಾವ್ ಹೆರೋವ್‌ಸ್ಕಿ |
| 1960 | ಅಮೇರಿಕಾ | ವಿಲಿಯರ್ಡ್ ಎಫ್ ಲಿಬ್ಬಿ |

(ಮುಂದುವರೆಯುವುದು)

ಸಂಪಾದಕ : ಮುದ್ರಕ : ಪ್ರಕಾಶಕ : ಕೊಂಡಜ್ಜಿ ಕೆ. ವೆಂಕಟೇಶ್
ಕೊಂಡಜ್ಜಿ ಪ್ರಿಂಟರ್ಸ್, 216, ಸುಬ್ರಮಣ್ಯನಗರ, ಬೆಂಗಳೂರು-560 021.

SAMANYA GNANA, Kannada Monthly, AUGUST 1985 Price 75 P. Regd No. BGW — 75

ತೆರೆ-




—ಗೆ

ಶ್ರೀಮತಿ/ಶ್ರೀ J. Srinivas Murthy
18, IV Cross Kodandaramapuram
Malleswaram Bangalore - 3